# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 36 (59)

ಸದಸ್ಯರ ಹೆಸರು : ಶ್ರೀ.ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 13-09-2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅರಣ್ಯದಂಚಿನ ಹೊಲಗದ್ದೆಗಳಲ್ಲಿ ಬೆಳೆದ ಬೆಳೆಗಳನ್ನು ಕಾಡು ಪ್ರಾಣಿಗಳು ನಾಶ ಮಾಡುತ್ತಿರುವುದರಿಂದ ರೈತರಿಗೆ ಆಗುತ್ತಿರುವ ನಷ್ಟಗಳ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದಕ್ಕೆ ಶಾಶ್ವತ ಪರಿಹಾರವನ್ನು ಕಂಡು ಹಿಡಿಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಬಂದಿದೆ.<br>ಹಾಸನ ಜಿಲ್ಲೆಯಲ್ಲಿ ವನ್ಯಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ಹಾಸನ ಜಿಲ್ಲೆ ವ್ಯಾಪ್ತಿಯಲ್ಲಿ ಬರುವ ಸಕಲೇಶಪುರ, ಆಲೂರು, ಅರಕಲಗೂಡು, ಬೇಲೂರು ಮತ್ತು ಯಸಳೂರು ವಲಯಗಳಲ್ಲಿ ಕಾಡಾನೆಗಳ ಹಾವಳಿ ಹೆಚ್ಚಾಗಿದ್ದು, ಕಾಡಾನೆಗಳನ್ನು ನಿಯಂತ್ರಿಸಲು 22 ಕಾಡಾನೆಗಳನ್ನು ಹಿಮ್ಮೆಟ್ಟಿಸುವ ತಂಡ, 05 ಕ್ಷಿಪ್ರ ಕಾರ್ಯಪಡೆ ತಂಡ ರಚಿಸಿ, ಕಾಡಾನೆಗಳು ನಾಡಿಗೆ ಬಾರದಂತೆ ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ.<br>2. ಆನೆ ನಿರೋಧಕ ಕಂದಕ ನಿರ್ಮಾಣ ಮತ್ತು ನಿರ್ವಹಣೆ<br>3. ಅರಣ್ಯದಂಚಿನಲ್ಲಿ ಬರುವ ಹಿಡುವಳಿ ಜಮೀನುಗಳಲ್ಲಿ ರೈತರು ಬೆಳೆದ ಬೆಳೆಗಳನ್ನು ವನ್ಯಪ್ರಾಣಿಗಳ ದಾಳಿಯಿಂದ ರಕ್ಷಿಸಲು ಸೌರಶಕ್ತಿ ಬೇಲಿ ನಿರ್ಮಿಸಿಕೊಳ್ಳುವ ರೈತರಿಗೆ ಶೇ.50 ಸಹಾಯಧನ ಒದಗಿಸುವುದು.<br>4. ಉಪಟಳ ನೀಡುವ ಪುಂಡಾನೆಗಳನ್ನು ಸೆರೆಹಿಡಿದು ಸ್ಥಳಾಂತರಿಸುವ ಕಾರ್ಯ.<br>5. ವೀಕ್ಷಣಾ ಗೋಪುರಗಳ ನಿರ್ಮಾಣ.<br>6. ವೀಕ್ಷಣಾ ರೇಖೆಗಳ ನಿರ್ವಹಣೆ<br>7. ಮಾನವ-ವನ್ಯಪ್ರಾಣಿಗಳ ಸಂಘರ್ಷ ನಿಯಂತ್ರಣದ ಬಗ್ಗೆ ರೈತರಿಗೆ, ಸಾರ್ವಜನಿಕರಿಗೆ ಅರಿವು ಮೂಡಿಸುವ ಬಗ್ಗೆ ತರಬೇತಿ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಕಾಡುಪ್ರಾಣಿಗಳ ಹಾವಳಿಯಿಂದ ಎಷ್ಟು ಎಕರೆ ಬೆಳೆ ಹಾನಿಯಾಗಿದೆ; ಯಾವ ಯಾವ ಬೆಳೆ ಹಾನಿಯಾಗಿದೆ; ಸದರಿ ಹಾನಿಗಳಿಗೆ ಸರ್ಕಾರದಿಂದ ವಿತರಿಸಲಾದ ಪರಿಹಾರವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಹಾಸನ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಪಾವತಿಸಲಾದ ದಯಾತ್ಮಕ ಧನದ ವಿವರ ಅನುಬಂಧ-1ರಲ್ಲಿ ಒದಗಿಸಿದೆ.<br><br>ಮುಂದುವರೆದು, ಆದೇಶ ಸಂಖ್ಯೆ:ಅಪಜೀ 130 ಎಫ್‌ಡಬ್ಲ್ಯುಎಲ್ 2016, ಬೆಂಗಳೂರು, ದಿನಾಂಕ 19.09.2016 ರಂತೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆ ಹಾನಿ ಪ್ರಕರಣಗಳಲ್ಲಿ ಎಕ್ಸ್‌ಗ್ರೇಷಿಯಾ ಮೊತ್ತವನ್ನು ಸಂಖ್ಯೆ / ಕ್ವಿಂಟಾಲ್ ಲೆಕ್ಕದಲ್ಲಿ ಮೌಲ್ಯಮಾಪನ ಮಾಡಿ ನಿಗದಿಪಡಿಸಿದ ಪರಿಹಾರದ ಮೊತ್ತವನ್ನು ಪಾವತಿಸಲಾಗುತ್ತಿರುವುದರಿಂದ ಹೆಕ್ಟೇರು / ಎಕರೆ ಪ್ರಮಾಣದ ಹಾನಿಯ ವಿವರ ದಾಖಲಿಸಲಾಗುತ್ತಿರುವುದಿಲ್ಲ.<br><br>ವನ್ಯಪ್ರಾಣಿಗಳ ಹಾವಳಿಯಿಂದ ಇ-ಪರಿಹಾರ ತಂತ್ರಾಂಶದಲ್ಲಿ ದಾಖಲಾದಂತೆ ಆಲೂರು, ಸಕಲೇಶಪುರ, ಯಸಳೂರು ಮತ್ತು ಬೇಲೂರು ತಾಲ್ಲೂಕು / ವಲಯಗಳಲ್ಲಿ ಕಾಫಿ, ಕಾಳುಮೆಣಸು, ಏಲಕ್ಕಿ, ಬಾಳೆ, ಭತ್ತ ಹಾಗೂ ಹಾಸನ, ಅರಸೀಕೆರೆ, ಚನ್ನರಾಯಪಟ್ಟಣ, ಅರಕಲಗೂಡು ತಾಲ್ಲೂಕು / ವಲಯಗಳಲ್ಲಿ ಮೆಕ್ಕೆಜೋಳ, ರಾಗಿ, ಆಲೂಗಡ್ಡೆ ಮುಂತಾದ ತರಕಾರಿ ಬೆಳೆಗಳು ಹಾನಿಯಾಗುತ್ತಿರುವುದು ವರದಿಯಾಗಿರುತ್ತದೆ. |
| ಇ) | ಹಾಸನ ಜಿಲ್ಲೆಯಲ್ಲಿ ಕಾಡುಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ರೂಪಿಸಿರುವ ಯೋಜನೆಗಳು ಯಾವುವು; ಇದಕ್ಕಾಗಿ ಖರ್ಚು ಮಾಡಿರುವ ಅನುದಾನವೆಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು) | ಹಾಸನ ಜಿಲ್ಲೆಯಲ್ಲಿ ಕಾಡುಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು 2020-21ನೇ ಸಾಲಿನಲ್ಲಿ ರೂಪಿಸಿರುವ ಯೋಜನೆಗಳು ಹಾಗೂ ತಾಲ್ಲೂಕುವಾರು ಖರ್ಚು ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿದೆ. |

| ಸಂ. | ಲೆಕ್ಕ ಶೀರ್ಷಿಕೆ | ತಾಲ್ಲೂಕು | ವೆಚ್ಚ (ರೂ.ಗಳಲ್ಲಿ) |
|---|---|---|---|
| 1) | 2406-02-110-0-54-ಮಾನವ-ವನ್ಯಪ್ರಾಣಿ ಸಂಘರ್ಷ ನಿಯಂತ್ರಣ-139-ಪ್ರಧಾನ ಕಾಮಗಾರಿ | ಆಲೂರು | 68,80,553/- |
| | | ಬೇಲೂರು | 2,06,122/- |
| | | ಸಕಲೇಶಪುರ | 1,33,47,297/- |
| | | ಚನ್ನರಾಯಪಟ್ಟಣ | 1,66,000/- |
| | | ಒಟ್ಟು | 2,05,99,972/- |

.....3

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|

| ಸಂ | ಲೆಕ್ಕ ಶೀರ್ಷಿಕೆ | ತಾಲ್ಲೂಕು | ವೆಚ್ಚ (ರೂ.ಗಳಲ್ಲಿ) |
|---|---|---|---|
| 2) | 2406-02-110-0-01-ಪ್ರಾಕೃತಿಕ ವನ್ಯಜೀವಿ ಸಂರಕ್ಷಣೆ-139-ಪ್ರಧಾನ ಕಾಮಗಾರಿ | ಆಲೂರು | 5,03,127/- |
| | | ಸಕಲೇಶಪುರ | 15,34,961/- |
| | | ಒಟ್ಟು | **20,38,088/-** |
| 3) | 2406-02-110-0-23-ಆನೆಯೋಜನೆ-139-ಪ್ರಧಾನ ಕಾಮಗಾರಿ | ಆಲೂರು | 1,10,900/- |
| | | ಬೇಲೂರು | 7,10,720/- |
| | | ಸಕಲೇಶಪುರ | 8,67,687/- |
| | | ಅರಕಲಗೂಡು | 1,98,200/- |
| | | ಒಟ್ಟು | **18,87,507/-** |
| 4) | 2406-02-110-0-54-ಮಾನವ-ವನ್ಯಪ್ರಾಣಿ ಸಂಘರ್ಷ ನಿಯಂತ್ರಣ-106-ಸಬ್ಸಿಡೀಸ್ 50:50 ಅನುಪಾತದಲ್ಲಿ ಸೌರತಂತಿ ಬೇಲಿ ನಿರ್ಮಾಣ | ಸಕಲೇಶಪುರ | **5,00,000/-** |
| 5) | 4406-01-101-0-01-ಉಪಯೋಗಿತ ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣದಿಂದ ಮಾನವ-ಹತ್ಯೆ ಪ್ರಾಣಿ ಸಂಘರ್ಷ ನಿಯಂತ್ರಣ-132-ಬಂಡವಾಳ ವೆಚ್ಚಗಳು | ಆಲೂರು | **4,65,00,000/-** |
| | | ಒಟ್ಟು ಮೊತ್ತ | **7,15,25,567/-** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | ಈ ಮೇಲ್ಕಂಡ ಅನುದಾನದಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ.<br>1. ಹಾಸನ ವಿಭಾಗ ವ್ಯಾಪ್ತಿಯಲ್ಲಿ ಬರುವ ಸಕಲೇಶಪುರ, ಆಲೂರು, ಅರಕಲಗೂಡು, ಬೇಲೂರು & ಯಸಳೂರು ವಲಯಗಳಲ್ಲಿ ಕಾಡಾನೆಗಳ ಹಾವಳಿ ಹೆಚ್ಚಾಗಿದ್ದು, ಸದರಿ ಕಾಡಾನೆಗಳನ್ನು ನಿಯಂತ್ರಿಸಲು ತಲಾ 4 ಜನರ ತಂಡದಂತೆ 21 ಕಾಡಾನೆಗಳನ್ನು ಹಿಮ್ಮೆಟ್ಟಿಸುವ ತಂಡಗಳು, 05 ಕ್ಷಿಪ್ರ ಕಾರ್ಯಪಡೆ ತಂಡಗಳನ್ನು ರಚಿಸಿ, ಕಾಡಾನೆಗಳು ನಾಡಿಗೆ ಬಾರದಂತೆ ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ.<br>2. ಆನೆ ನಿರೋಧಕ ಕಂದಕ ನಿರ್ಮಾಣ.<br>3. 50% ಸಹಾಯಧನ (ಸಬ್ಸಿಡಿ) ಆಧಾರಿತ ಸೋಲಾರ್ ತಂತಿಬೇಲಿ ನಿರ್ಮಾಣ.<br>4. ಉಪಯೋಗಿತ ರೈಲ್ವೆ ಹಳಿಗಳನ್ನು ಉಪಯೋಗಿಸಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣ.<br>5. ಉಪದ್ರವಕಾರಿ ಪುಂಡಾನೆಗಳನ್ನು ಸೆರೆಹಿಡಿದು ಸ್ಥಳಾಂತರಿಸುವ ಕಾರ್ಯ.<br>6. ಪಟಾಕಿ ಖರೀದಿಸಿ ರೈತರಿಗೆ ಹಂಚಿಕೆ ಮಾಡಿರುವುದು.<br>7. ಅರಣ್ಯದೊಳಗೆ ಅಟ್ಟಣಿಗೆಗಳ ನಿರ್ಮಾಣ.<br>8. ವೀಕ್ಷಣಾ ಗೋಪುರಗಳ ನಿರ್ಮಾಣ.<br>9. ವೀಕ್ಷಣಾ ರೇಖೆಗಳ ನಿರ್ವಹಣೆ<br>ಮಾನವ-ವನ್ಯಪ್ರಾಣಿಗಳ ಸಂಘರ್ಷ ನಿಯಂತ್ರಣದ ಬಗ್ಗೆ ರೈತರಿಗೆ ಸಾರ್ವಜನಿಕರಿಗೆ ಅರಿವು ಮೂಡಿಸುವ ಬಗ್ಗೆ ತರಬೇತಿ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |

**ಸಂಖ್ಯೆ: ಅಪಜೀ 156 ಎಫ್ ಡಬ್ಲ್ಯೂ ಎಲ್ 2021**

(ಉಮೇಶ್ ವಿ.ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

## ಅನುಬಂಧ-1

ವಿಧಾನ ಸಭಾ ಸದಸ್ಯರಾದ ಶ್ರೀ ಎಂ. ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಪ್ರಶ್ನೆ ಸಂಖ್ಯೆ 36(59)

ವಿಷಯ : ಅರಣ್ಯದಂಚಿನ ಹೊಲಗದ್ದೆಗಳಿಗೆ ಕಾಡುಪ್ರಾಣಿಗಳ ಹಾವಳಿ ಬಗ್ಗೆ

(ರೂ.ಗಳಲ್ಲಿ)

| ಕ್ರ.ಸಂ | ಜಿಲ್ಲೆ | ತಾಲ್ಲೂಕು ವಿವರ | 2018-19 | | 2019-20 | | 2020-21 | |
|---|---|---|---|---|---|---|---|---|
| | | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | 2 | 3 | 7 | 8 | 10 | 11 | 10 | 11 |
| 1 | ಹಾಸನ | ಆಲೂರು | 440 | 30,26,330 | 340 | 21,61,940 | 933 | 74,84,348 |
| 2 | | ಸಕಲೇಶಪುರ | 484 | 32,54,095 | 597 | 41,12,427 | 1,227 | 94,60,446 |
| 3 | | ಯಸಳೂರು | 463 | 28,91,640 | 939 | 54,70,052 | 743 | 43,11,077 |
| 4 | | ಬೇಲೂರು | 0 | 0 | 102 | 10,15,115 | 62 | 11,22,108 |
| 5 | | ಹಾಸನ | 59 | 3,05,460 | 83 | 8,67,244 | 112 | 5,76,439 |
| 6 | | ಅರಸೀಕೆರೆ | 47 | 2,88,710 | 11 | 86,460 | 68 | 3,41,983 |
| 7 | | ಚೆನ್ನರಾಯಪಟ್ಟಣ | 22 | 1,97,000 | 87 | 722500 | 83 | 5,58,168 |
| 8 | | ಹೊಳೆನರಸಿಪುರ | 58 | 2,48,800 | 22 | 99,800 | 115 | 5,56,030 |
| 9 | | ಅರಕಲಗೂಡು | 92 | 4,27,135 | 96 | 5,64,450 | 287 | 25,31,221 |
| | | ಒಟ್ಟು | **1,665** | **1,06,39,170** | **2,277** | **1,50,99,988** | **3,630** | **2,69,41,820** |